# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1254 |
| ಸದಸ್ಯರ ಹೆಸರು | : | ಡಾ॥ ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 17.03.2020 |
| ಉತ್ತರಿಸಬೇಕಾದ ಸಚಿವರು | : | ನಗರಾಭಿವೃದ್ಧಿ ಸಚಿವರು. |

********

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | KUWSSB ವತಿಯಿಂದ ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲ್ಲೂಕಿನಲ್ಲಿ ಅನುಷ್ಠಾನಗೊಳಿಸುತ್ತಿರುವ ಯರಗೋಳ ಯೋಜನೆಯನ್ನು ಯಾವ ಕಾಲಮಿತಿಯೊಳಗೆ ಪೂರ್ಣಗೊಳಿಸಲಾಗುವುದು; | ಕೋಲಾರ, ಬಂಗಾರಪೇಟೆ ಮತ್ತು ಮಾಲೂರು ಪಟ್ಟಣಗಳಿಗೆ ಹಾಗೂ ಮಾರ್ಗ ಮಧ್ಯದ 45 ಗ್ರಾಮಗಳಿಗೆ ಕುಡಿಯುವ ನೀರನ್ನು ಒದಗಿಸುವ ಯರಗೋಳು ಯೋಜನೆ ಕಾಮಗಾರಿಗೆ 2 ಅಂದಾಜು ಪಟ್ಟಿ ಮಂಜೂರಾಗಿದ್ದು, ವಿವರಗಳು ಈ ಕೆಳಕಂಡಂತಿರುತ್ತವೆ.<br><br>1. **ಮೊದಲನೇ ಹಂತದ ಕಾಮಗಾರಿಗಳ ಅಂದಾಜು ವೆಚ್ಚ ರೂ.16000.00 ಲಕ್ಷಗಳು:** 500 ಎಂ.ಸಿ.ಎಫ್.ಟಿ ಸಾಮರ್ಥ್ಯದ ಅಣೆಕಟ್ಟು ಹಾಗೂ ಜಾಕ್‌ವೆಲ್ ನಿರ್ಮಿಸುವ, ಏರು ಕೊಳವೆ ಮಾರ್ಗ, ಸಂಪರ್ಕ ರಸ್ತೆ ಮತ್ತು ಮುಳ್ಳು ತಂತಿ ಅಳವಡಿಸುವ ರೂ. 8718.45 ಲಕ್ಷಗಳ ಕಾಮಗಾರಿಯ ಗುತ್ತಿಗೆಯನ್ನು ಮೆ॥ ರಾಮ್ಕಿ ಇನ್‌ಫ್ರಾಸ್ಟ್ರಕ್ಚರ್ಸ್ ಪ್ರೈ. ಲಿ. ಹೈದರಾಬಾದ್, ಇವರಿಗೆ ಗುತ್ತಿಗೆ ನೀಡಲಾಗಿದ್ದು, ಶೇ. 95% ರಷ್ಟು ಕಾಮಗಾರಿಗಳು ಪೂರ್ಣಗೊಂಡಿವೆ. ಭೂಸ್ವಾಧಿನ ವೆಚ್ಚ, ಹೆಚ್ಚುವರಿ ಕಾಮಗಾರಿಗಳು ಹಾಗೂ ಇತರೆ ವೆಚ್ಚಗಳಿಂದ ಯೋಜನಾ ವೆಚ್ಚವು ಅಧಿಕವಾದ ಕಾರಣ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಿಂದ ರೂ.18600.00 ಲಕ್ಷಗಳ ಪರಿಷ್ಕೃತ ಅಂದಾಜು ಪಟ್ಟಿಯು ಸ್ವೀಕೃತವಾಗಿದ್ದು, ಸರ್ಕಾರದ ಪರಿಶೀಲನೆಯಲ್ಲಿದೆ.<br><br>2. **ಎರಡನೇ ಹಂತದ ಕಾಮಗಾರಿಗಳು (ಯು.ಐ.ಡಿ.ಎಸ್. ಎಸ್.ಎಂ.ಟಿ. ಯೋಜನೆ) ಅಂದಾಜು ವೆಚ್ಚ ರೂ.7992.80 ಲಕ್ಷಗಳು:**<br>ವಿವಿಧ ವ್ಯಾಸದ ಕೊಳವೆ ಮಾರ್ಗ, ಮೇಲ್ಮಟ್ಟದ ಜಲಸಂಗ್ರಹಾಗಾರಗಳು, ಶುದ್ಧೀಕರಣ ಘಟಕ ಹಾಗೂ ಪೂರಕ ಕಾಮಗಾರಿಗಳ ರೂ.8888.79 ಲಕ್ಷಗಳ ಗುತ್ತಿಗೆಯನ್ನು ಮೆ॥ ಇ.ಪಿ.ಐ.ಎಲ್, ಹೈದರಾಬಾದ್, ಇವರಿಗೆ ಗುತ್ತಿಗೆ ನೀಡಲಾಗಿದ್ದು, ಶೇ. 88% ರಷ್ಟು ಕಾಮಗಾರಿಯು ಪೂರ್ಣಗೊಂಡಿರುತ್ತದೆ. ಈ ಯೋಜನೆಗೆ ಸಂಬಂಧಿಸಿದಂತೆ ಪರಿಷ್ಕೃತ ಅಂದಾಜು ಪಟ್ಟಿ ಮೊತ್ತ ರೂ.12778.64 ಲಕ್ಷಗಳಿಗೆ ಅನುಮೋದನೆ ಕೋರಿ ಪೌರಾಡಳಿತ ನಿರ್ದೇಶನಾಲಯದಿಂದ ಪ್ರಸ್ತಾವನೆ ಸ್ವೀಕೃತವಾಗಿದ್ದು, ಸರ್ಕಾರದ ಪರಿಶೀಲನೆಯಲ್ಲಿದೆ. |

| | | |
|---|---|---|
| ಆ) | ಪ್ರಸ್ತುತ ಈ ಯೋಜನೆ ಎಷ್ಟು ಪ್ರಮಾಣದಲ್ಲಿ ಪೂರ್ಣಗೊಂಡಿದೆ ಹಾಗೂ ಇದುವರೆಗೆ ಈ ಯೋಜನೆಗಾಗಿ ಮಾಡಿರುವ ವೆಚ್ಚ ಎಷ್ಟು; | 1) **ಮೊದಲನೆ ಹಂತದ ರಾಜ್ಯ ಸರ್ಕಾರದ ಅನುದಾನದಡಿ ಕಾಮಗಾರಿಗಳ ಅಂದಾಜು ಮೊತ್ತ ರೂ.16000.00 ಲಕ್ಷಗಳು** – ಸದರಿ ಯೋಜನೆಯಡಿಯಲ್ಲಿ ಶೇ 95% ರಷ್ಟು ಪೂರ್ಣಗೊಂಡಿರುತ್ತದೆ. ಇಲ್ಲಿಯ ತನಕ ರೂ.15354.71 ಲಕ್ಷಗಳು ವೆಚ್ಚವಾಗಿರುತ್ತದೆ.<br><br>2) **ಎರಡನೇ ಹಂತದ ಕೇಂದ್ರ ಸರ್ಕಾರದ (ಯು.ಐ.ಡಿ.ಎಸ್.ಎಸ್.ಎಂ.ಟಿ.) ಯೋಜನೆಯ ಅನುದಾನದಡಿ ಕಾಮಗಾರಿಗಳು ಅಂದಾಜು ಮೊತ್ತ ರೂ.7992.80 ಲಕ್ಷಗಳು** ಸದರಿ ಯೋಜನೆಯಡಿಯಲ್ಲಿ ಶೇ88 ರಷ್ಟು ಪೂರ್ಣಗೊಂಡಿರುತ್ತದೆ. ಇಲ್ಲಿಯ ತನಕ ರೂ.7204.27 ಲಕ್ಷಗಳು ವೆಚ್ಚವಾಗಿರುತ್ತದೆ. |
| ಇ) | ಈ ಯೋಜನೆಯು ಇಷ್ಟು ವಿಳಂಬವಾಗಲು ಇರುವ ಕಾರಣಗಳೇನು; ಹಾಗೂ ಇದಕ್ಕೆ ಹೊಣೆಗಾರರು ಯಾರು? | **<u>ಕಾಮಗಾರಿ ವಿಳಂಬವಾಗಲು ಕಾರಣಗಳು ಈ ಕೆಳಗಿನಂತಿದೆ:</u>**<br><br>1) **ರಾಜ್ಯ ಸರ್ಕಾರದ ಅನುದಾನದಡಿಯಲ್ಲಿ 500 ಎಂ.ಸಿ.ಎಫ್.ಟಿ ಸಾಮರ್ಥ್ಯದ ಅಣೆಕಟ್ಟು ನಿರ್ಮಾಣ ಹಾಗೂ ಪೂರಕ ಕಾಮಗಾರಿಗಳು:**<br>• ದಿನಾಂಕ: 30-11-2010 ರಂದು ಗುತ್ತಿಗೆದಾರರೊಂದಿಗೆ ಕರಾರು ಮಾಡಿಕೊಳ್ಳಲಾಗಿದ್ದರೂ ಸಹ, ಅರಣ್ಯ ಇಲಾಖೆ ಮತ್ತು ಕೇಂದ್ರ ಪರಿಸರ ಇಲಾಖೆಯ ಅನುಮತಿ ದೊರೆಯುವುದು ವಿಳಂಬವಾದ್ದರಿಂದ ಗುತ್ತಿಗೆದಾರರಿಗೆ ಸಂಪೂರ್ಣ ಜಾಗವನ್ನು ದಿನಾಂಕ: 21-03-2013 ರಲ್ಲಿ ಹಸ್ತಾಂತರಿಸಿದ್ದರಿಂದ 28 ತಿಂಗಳ ಕಾಲ ವಿಳಂಬವಾಗಿರುತ್ತದೆ.<br>• ಅಣೆಕಟ್ಟು ಅಡಿಪಾಯ ತೆಗೆಯುವ ಸಂದರ್ಭದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಗಟ್ಟಿ ಕಲ್ಲು ಬಂಡೆಗಳು ದೊರೆತಿರುವುದರಿಂದ ಅದನ್ನು ತೆಗೆಯಲು ಆಗಿರುವ ವಿಳಂಬ – 90 ದಿನಗಳು.<br>• ಗುತ್ತಿಗೆದಾರರ ಮಂದಗತಿಯ ಕಾರ್ಯವೂ ಸಹ ವಿಳಂಬಕ್ಕೆ ಕಾರಣವಾಗಿರುವುದರಿಂದ ಈ ವಿಳಂಬಕ್ಕೆ ಟೆಂಡರ್ ಕರಾರಿನಂತೆ ಗುತ್ತಿಗೆದಾರರಿಗೆ ರೂ.215.28 ಲಕ್ಷಗಳ ದಂಡವನ್ನು ವಿಧಿಸಲಾಗಿದೆ.<br><br>2) **ಕೇಂದ್ರ ಸರ್ಕಾರದ ಯು.ಐ.ಡಿ.ಎಸ್.ಎಸ್.ಎಂ.ಟಿ ಯೋಜನೆಯಡಿಯಲ್ಲಿ ಕಾಮಗಾರಿಗಳು**<br>• ಮುಖ್ಯ ಏರುಕೊಳವೆ ಮಾರ್ಗವನ್ನು ಲೋಕೋಪಯೋಗಿ ಇಲಾಖೆಯ ರಸ್ತೆಯ ಮಧ್ಯ ಭಾಗದಿಂದ 10-15 ಮೀ ಅಂಚಿನಲ್ಲಿ ಅಳವಡಿಸುವ ಸಂದರ್ಭಗಳಲ್ಲಿ ಖಾಸಗಿ ಭೂಮಾಲೀಕರ ಮನವೊಲಿಸುವಲ್ಲಿ ಹಾಗೂ ಗ್ರಾಮಗಳ ಸರಹದ್ದಿನಲ್ಲಿ ಕೊಳವೆಗಳನ್ನು ಅಳವಡಿಸಲು ಸ್ಥಳೀಯರ ವಿರೋಧವಿದ್ದುದರಿಂದ ಅವರ ಮನವೊಲಿಸಿ ಅವರ ಸಹಕಾರದೊಂದಿಗೆ ಕಾಮಗಾರಿ ಕೈಗೊಳ್ಳಲು ಆಗಿರುವ ವಿಳಂಬ – 2509 ದಿನಗಳು.<br>• ರೈಲ್ವೆ ಇಲಾಖೆಯ ಸರಹದ್ದಿನಲ್ಲಿ ನಾಲ್ಕು ಕಡೆ ಕೊಳವೆ ಮಾರ್ಗ ಅಳವಡಿಸಲು ಸದರಿ ಇಲಾಖೆಯಿಂದ ಅನುಮತಿ ನೀಡುವಲ್ಲಿ ಸಾಕಷ್ಟು ವಿಳಂಭವಾಗಿರುತ್ತದೆ.<br>• ಬಂಗಾರಪೇಟೆ ಪುರಸಭಾ ವ್ಯಾಪ್ತಿಯ ಪಟ್ಟಾಭಿಷೇಕ |

| | | |
|---|---|---|
| | | ಉದ್ಯಾನವನದಲ್ಲಿ 10 ಲಕ್ಷ. ಲೀಟರ್ ಸಾಮರ್ಥ್ಯದ ಮೇಲ್ಮಟ್ಟ ಜಲಸಂಗ್ರಹಾಗಾರ ನಿರ್ಮಾಣದ ಸಂದರ್ಭದಲ್ಲಿ ಸಾರ್ವಜನಿಕರು ನ್ಯಾಯಾಲಯದಿಂದ ತಂದಿದ್ದ ತಡೆಯಾಜ್ಞೆಯನ್ನು ತೆರವುಗೊಳಿಸಿ ಪೂರ್ಣಗೊಳಿಸುವಲ್ಲಿ ಆಗಿರುವ ವಿಳಂಬ - 2536 ದಿನಗಳು<br>• ಬಂಗಾರಪೇಟೆ ಪಟ್ಟಣದಲ್ಲಿ 13 ಎಂ.ಎಲ್.ಡಿ ಸಾಮರ್ಥ್ಯದ ಜಲಶುದ್ಧೀಕರಣ ಘಟಕವನ್ನು ದಿನಾಂಕ: 24-05-2015 ರಂದು ಅಂದರೆ ಕಾರ್ಯಾದೇಶ ನೀಡಿದ ದಿನಾಂಕ ದಿಂದ 6 ವರ್ಷ 5 ತಿಂಗಳ ನಂತರ ಸ್ಥಳೀಯ ಸಂಸ್ಥೆ ವತಿಯಿಂದ ಜಾಗವನ್ನು ಹಸ್ತಾಂತರಿಸಲಾಗಿದ್ದರಿಂದ 2340 ದಿನಗಳು ವಿಳಂಬವಾಗಿರುತ್ತದೆ.<br>• ಕೋಲಾರ ಜಿಲ್ಲೆಯಲ್ಲಿ 4 ಸಂಖ್ಯೆ ಮೇಲ್ಮಟ್ಟ ಜಲಸಂಗ್ರಹಾಗಾರಗಳಿಗೆ ತಾಂತ್ರಿಕವಾಗಿ ಸೂಕ್ತವಾಗಿರುವ ಜಾಗಗಳನ್ನು ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಳಿಸಿ ಮಂಡಳಿಗೆ ಸ್ಥಳೀಯ ಸಂಸ್ಥೆಯಿಂದ ಗುತ್ತಿಗೆದಾರರ ಟೆಂಡರ್ ಅವಧಿ ಮುಗಿದ ನಂತರ ಹಸ್ತಾಂತರಿಸಲಾಗಿರುತ್ತದೆ.<br>• ಈ ಕಾಮಗಾರಿಯಲ್ಲಿ ಗುತ್ತಿಗೆದಾರರಿಂದ ಆಗಿರುವ ವಿಳಂಬವನ್ನು ಪರಿಶೀಲಿಸಿ, ಸದರಿಯವರಿಗೆ ರೂ. 156.78 ಲಕ್ಷಗಳ ದಂಡ ವಿಧಿಸಿ, ಕಾಲ ವಿಸ್ತರಣೆ ನೀಡಿ ಕಾಮಗಾರಿ ಮುಂದುವರೆಸಿದೆ.<br><br>ಮೇಲೆ ತಿಳಿಸಿರುವ ಹಲವಾರು ಕಾರಣಗಳಿಂದ ಕಾಮಗಾರಿ ಅನುಷ್ಠಾನದಲ್ಲಿ ವಿಳಂಬವಾಗಿರುತ್ತದೆ. |

**ಸಂಖ್ಯೆ: ನಅಇ 54 ಯುಎಂಎಸ್ 2020**

**(ಬಿ.ಎ. ಬಸವರಾಜ)**
ನಗರಾಭಿವೃದ್ಧಿ ಸಚಿವರು